<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 105
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ ರಾಥೋಡ್(ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 01-02-2021.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಖಾಸಗಿ ವಿದ್ಯಾ ಸಂಸ್ಥೆಗಳು ಅಗ್ನಿಶಾಮಕ ಹಾಗೂ ಕಟ್ಟಡ ಸುಸ್ಥಿತಿ ದೃಢೀಕರಣ ಪತ್ರವನ್ನು ಪಡೆಯಲು ಇಚ್ಛಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br><br>ಮಾನ್ಯ ಸರ್ವೋಚ್ಛ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 483/2004 ದಿನಾಂಕ: 13-04-2009ರ ತೀರ್ಪಿನಲ್ಲಿ ಶಾಲಾ ಕಾಲೇಜುಗಳ ಕಟ್ಟಡವು ಸುರಕ್ಷಿತ ಮತ್ತು ಎಲ್ಲಾ ಕೋನಗಳಿಂದ ಸುಭದ್ರವಾಗಿದೆ ಎಂಬುದನ್ನು ಮತ್ತು National Building code ರಲ್ಲಿನ ಸುರಕ್ಷತಾ ನಿಬಂಧನೆಗಳನ್ವಯ ಕಟ್ಟಡ ನಿರ್ಮಿಸಿರುವುದನ್ನು ಮತ್ತು ಅಗ್ನಿಶಾಮಕ ಉಪಕರಣಗಳನ್ನು ಅಳವಡಿಸಿಕೊಂಡಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ನೀಡಿರುವ ಪ್ರಮಾಣ ಪತ್ರ ಪಡೆದಿರುವುದನ್ನು ಖಚಿತಪಡಿಸಿಕೊಳ್ಳಲು ಎಲ್ಲಾ ರಾಜ್ಯ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸೂಚಿಸಲಾಗಿದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 709 ಪಿಜಿಸಿ 2017 ದಿನಾಂಕ:08-03-2018ರ ಅಧಿಸೂಚನೆಯಲ್ಲಿಯೂ ಸಹ ಹೊಸ ಶಾಲೆ ಪ್ರಾರಂಭದ ನೋಂದಣಿ ಅನುಮತಿಗೆ ಕಟ್ಟಡ ಸುರಕ್ಷತೆಗೆ ಮತ್ತು ಅಗ್ನಿ ಸುರಕ್ಷತೆ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯುವುದು ಕಡ್ಡಾಯವಾಗಿರುತ್ತದೆ.<br><br>ಸರ್ಕಾರದ ಸುತ್ತೋಲೆ ಸಂಖ್ಯೆ:ಇಪಿ 46 ಎಸ್‌ಹೆಚ್‌ಹೆಚ್ 2020 ದಿನಾಂಕ:10-11-2020ರಲ್ಲಿ ರಾಜ್ಯದಲ್ಲಿನ ಖಾಸಗಿ ಅನುದಾನಿತ/ ಅನುದಾನರಹಿತ ಪ್ರಾಥಮಿಕ, ಪ್ರೌಢ ಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಹೊಸ ಭಾಷೆ, ಸಂಯೋಜನೆ ಹಾಗೂ ಹೆಚ್ಚುವರಿ ವಿಭಾಗಗಳನ್ನು ಅನುಮತಿಸುವ ಸಂದರ್ಭದಲ್ಲಿ ಕಟ್ಟಡ ಸುರಕ್ಷತಾ ಪ್ರಮಾಣ ಪತ್ರದ ಅಗತ್ಯತೆಯನ್ನು ನಿಗಧಿಪಡಿಸಿದೆ. |

| | | |
|---|---|---|
| ಆ) | ದೃಢೀಕರಣ ಪತ್ರವು ಖಾಸಗಿ ವಿದ್ಯಾ ಸಂಸ್ಥೆಗಳಿಗೆ ಮಾತ್ರ ಅನ್ವಯಿಸುತ್ತದೆಯೇ; ಅಥವಾ ಸರ್ಕಾರಿ ವಿದ್ಯಾಸಂಸ್ಥೆಗೂ ಅನ್ವಯಿಸುತ್ತದೆಯೇ? (ಸಂಪೂರ್ಣ ವಿವರ ಒದಗಿಸುವುದು) | ಸರ್ಕಾರಿ ವಿದ್ಯಾ ಸಂಸ್ಥೆಗಳ ಕಟ್ಟಡಗಳಿಗೆ ಮಾನ್ಯ ಸರ್ವೋಚ್ಛ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 483/2004 ದಿನಾಂಕ: 13–04–2009ರ ತೀರ್ಪಿನಂತೆ National Building Code ರಲ್ಲಿನ ಸುರಕ್ಷತಾ ನಿಬಂಧನೆಗಳು ಅನ್ವಯವಾಗುತ್ತದೆ. ಖಾಸಗಿ ವಿದ್ಯಾ ಸಂಸ್ಥೆಗಳ ಕಟ್ಟಡಗಳಿಗೆ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಇಂಜಿನಿಯರ್‌ರವರಿಂದ ಸ್ಥಿರತೆ ಪ್ರಮಾಣ ಪತ್ರವನ್ನು ಪಡೆಯಲಾಗುತ್ತಿದೆ. |

**ಸಂಖ್ಯೆ: ಇಪಿ 20 ಡಿಜಿಡಬ್ಲ್ಯೂ 2021**

S. S.

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.